ಎಚ್. ಶ್ರೀಶೈಲ ಆರಾಧ್ಯ

# ಚಿತ್ರದುರ್ಗ ಚರಿತ್ರೆಯ ಎರಡು ಭೀಕರ ಪ್ರಸಂಗಗಳು

---

೧. ಮನುಷ್ಯ ನೆತ್ತರನ್ನೇ ಕುಡಿದು ಬೆಳೆದ ಅಣಜಿ ಕೋಟೆ : ಕರ್ನಾಟಕದ ನಕ್ಷೆಯಲ್ಲಿ ಅಣಜಿಯೆನ್ನುವುದು ಒಂದು ಅಪ್ರಸಿದ್ಧ ಪುಟ್ಟ ಗ್ರಾಮ. ಚಿತ್ರದುರ್ಗ ಜಿಲ್ಲೆಯ ದಾವಣಗೆರೆ ತಾಲ್ಲೂಕಿನಲ್ಲಿರುವ ಈ ಊರಿನಲ್ಲಿ ನಡೆದ ಯುದ್ಧಗಳು ಮಾತ್ರ ಎದೆ ನಡುಗಿಸುವಂತಹವು. ಚಿತ್ರದುರ್ಗ ಸಂಸ್ಥಾನದ ಒಂದು ಮಹತ್ವದ ಸ್ಥಳವೆಂದು ಪ್ರತಿಷ್ಠೆ ಪಡೆದಿದ್ದ ಇದರ ಮೇಲೆ ಶತ್ರು ಪಾಳಯಗಾರರ ಕಣ್ಣು. ದುರ್ಗದ ಸಂಸ್ಥಾನದ ಗಡಿಪ್ರದೇಶವಿದಾಗಿದ್ದುದರಿಂದ ಆಕ್ರಮಣ, ಸಣ್ಣಪುಟ್ಟ ಕಾದಾಟಗಳು ಅಸಹಜವೇನಲ್ಲ. ಕ್ರಿ. ಶ. ೧೬೭೬ರಲ್ಲಿ ದುರ್ಗದ ಸಿಂಹಾಸನಕ್ಕೆ ಚಿಕ್ಕಣ್ಣನಾಯಕ ಪ್ರಭುವಾಗಿ ಬರುತ್ತಾನೆ. ಆ ಮರುವರ್ಷವೇ ಹರಪನಹಳ್ಳಿಯ ಪಾಳಯಗಾರರು ಅಣಜಿಗೆ ಮುತ್ತಿಗೆ ಹಾಕಿದರು. ದಳವಾಯಿ ಭೂಸಪ್ಪ, ಕೆಂಚನಗೌಡರ ಮುಂದಾಳುತನದಲ್ಲಿ ಕೋಟೆಯ ಉಸ್ತುವಾರಿಗಿದ್ದ ಫೌಜು ಜೀವದ ಹಂಗು ತೊರೆದು ಶತ್ರುಗಳೊಡನೆ ಕಾದುತ್ತದೆ. ಈ ಯುದ್ಧದಲ್ಲಿ ದುರ್ಗದವರಿಗೆ ಜಯವಾಯಿತು, ನಿಜ. ಆದರೆ ಹರಪನಹಳ್ಳಿಯ ದಂಡು ಅಣಜಿಯಿಂದ ಇಳಿಬಿದ್ದು ಓಡುತ್ತಿದ್ದಾಗ ಅದರ ಬೆನ್ನುಹತ್ತಿದ ಶೂರ ದಳವಾಯಿ ಭೂಸಪ್ಪನ ತಲೆಯನ್ನು ಆ ಊರಿನ ಈಶ್ವರಗುಡಿಯ ಹತ್ತಿರ ಹೊಡೆದು ಸೈನ್ಯ ಮುಂದೆ ಓಡುತ್ತದೆ. ಈ ವರ್ತಮಾನವೆಲ್ಲಾ ಸಾಣಿಕೆರೆಯಲ್ಲಿದ್ದ ನಾಯಕನಿಗೆ ಮುಟ್ಟಿ, ಅಲ್ಲಿಂದಲೇ ನಾಯಕ ಫೌಜಿನೊಡನೆ ಅಣಜಿಗೆ ಬರುತ್ತಾನೆ. ತಮ್ಮವರು ಗೆದ್ದ ವಿಷಯ ತಿಳಿದು ಸಂತೋಷಪಟ್ಟು, ಲಡಾಯಿಯಲ್ಲಿ ಕಾದಿದ ಅಣಜಿಯ ಸೈನ್ಯ, ಮಂದಿಗೆ ಹೊಲಗಳ ಮಾನ್ಯವನ್ನು, ವಸ್ತ್ರಾಭರಣ ಮೊದಲಾದ ಇನಾಮುಗಳನ್ನು ಕೊಟ್ಟು ಗೌರವಿಸಿ ತನ್ನ ರಾಜಧಾನಿಗೆ ತೆರಳುವನು.

ಚಿತ್ರದುರ್ಗದ ರಾಜ್ಯಾಡಳಿತದಲ್ಲಿ ದಳವಾಯಿಗಳು ಪ್ರಬಲಿಸಿ ಪಟ್ಟದ ದೊರೆಗಳ ತಲೆ ಹೊಡಿಸಿ ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದ ದಳವಾಯಿ ಮುದ್ದಣ್ಣನಾದರೋ ಚಿಕ್ಕಣ್ಣನಾಯಕನ ನಿಧನದ ತರುವಾಯ ಮತ್ತಷ್ಟು ಅತಿರೇಕಕ್ಕೆ ಹೋಗುತ್ತಾನೆ. ರಾಜ್ಯದಲ್ಲಿ ಅವನ ವಿರುದ್ಧ ಸೊಲ್ಲೆತ್ತಿದ ನಾಲಿಗೆಗೆ ಅಲಗಿನ ಸೇವೆ! ಶಿರಚ್ಛೇದನಗಳು ದೈನಂದಿನ ಸುದ್ದಿಯಾದುವು. ಈ ದೌರ್ಜನ್ಯ, ಕ್ರೌರ್ಯಗಳು ರಾಕ್ಷಸಾಕಾರವಾಗಿ ಬೆಳೆದು ನಿಂತಾಗ ರಾಜನಿಷ್ಠ ದಳವಾಯಿಗಳು, ಅಧಿಕಾರಿಗಳು, ಪ್ರಜೆಗಳೆಲ್ಲಾ ಒಂದಾಗಿ ಮುದ್ದಣ್ಣ ಮತ್ತು ಅವನ ವಂಶವನ್ನೇ ಕೊನೆಗೊಳಿಸಿದರು.

ಮತ್ತಿ ತಿಮ್ಮಣ್ಣನಾಯಕನ ವಂಶದ ಲಿಂಗಣ್ಣನಾಯಕನ ಕೊಲೆಯ ತರುವಾಯ ಆ ಮನೆತನದವರು ಯಾರೂ ಇಲ್ಲದಂತಾಗಲು ಅದೇ ಅಣ್ಣತಮ್ಮತನಕ್ಕೆ ಸೇರಿದ ಬಿಳಿಚೋಡು ಭರಮಣ್ಣನಾಯಕನನ್ನು ಕರೆತಂದು ಕ್ರಿ. ಶ. ೧೬೮೯ರಲ್ಲಿ ಚಿತ್ರದುರ್ಗ ಸಂಸ್ಥಾನದ ಪ್ರಭುವಾಗಿ ಪಟ್ಟಕಟ್ಟಿದರು.

ಮೂಲತಃ ವಾಲ್ಮೀಕಿ—ಕ್ಷತ್ರಿಯರಾದರೂ ಈ ಬಿಳಿಚೋಡು ವಂಶದವರು ಮಾತ್ರ ಕೃಷಿ, ಕುರಿ, ಮೇಕೆ ಇತ್ಯಾದಿಗಳಲ್ಲೇ ಸುಖ ಸಂತೃಪ್ತಿಯನ್ನನುಭವಿಸಿಕೊಂಡಿದ್ದವರು. ಇಂತಹ ಹಿನ್ನೆಲೆಯಿಂದ ಬಂದ ಭರಮಣ್ಣ

ನಾಯಕನಿಗೆ ಪಟ್ಟವಾದ ಮರುವರ್ಷವೇ ಹರಪನಹಳ್ಳಿಯ ಪಾಳಯಗಾರರು ಬಿದನೂರವರನ್ನು ಕೂಡಿಕೊಂಡು ಅಣಜಿಯನ್ನು ಮುತ್ತಿದರು. ದುರ್ಗದಲ್ಲಿ ದಳವಾಯಿಗಳಲ್ಲಿ ಐಕ್ಯತೆಯಿಲ್ಲ; ಸೈನಿಕರಿಗೆ ಸಂಬಳ ಕೊಡಲು ಬೊಕ್ಕಸದಲ್ಲಿ ಹಣವಿಲ್ಲ; ಇನ್ನು ದೊರೆಯಾದರೋ ನಿನ್ನೆ ಮೊನ್ನೆ ಬಂದವನೆನ್ನುವ ಭಾವನೆಯಿಂದ ಗೆಲ್ಲುವ ವಿಶ್ವಾಸದಿಂದಲೇ ಲಗ್ಗೆ ಹಾಕಿದ್ದರು.

ಈ ವಿಷಯ ರಾಜಧಾನಿಯನ್ನು ಮುಟ್ಟಿದ ಕೂಡಲೇ ಸಮರ್ಥನೂ ವಿವೇಕಿಯೂ ಆಗಿದ್ದ ದಳವಾಯಿ ಭರಮಣ್ಣ ಸೈನ್ಯದೊಡನೆ ಬಂದು ಅಣಜಿಯ ಮುತ್ತಿಗೆಯನ್ನೆಬ್ಬಿಸಲು ಪ್ರಾರಂಭಿಸಿದನು. ಆದರೇನು, ದುರ್ಗದ ದಂಡು ಸೋತುಹೋಯಿತು. ದಳವಾಯಿಯ ಅಂದಣ, ಬಿರುದು ಬಾವಲಿಗಳು ಶತ್ರು ವಶವಾದುವು. ಹರಪನಹಳ್ಳಿಯವರ ಅಂಕಿತಕ್ಕೆ ಅಣಜಿ ಸೀಮೆ ಸೇರಿಹೋಯಿತು. ದಳವಾಯಿ ಭರಮಣ್ಣ ಅಳಿದುಳಿದ ಸೇನೆಯೊಡನೆ ದುರ್ಗಕ್ಕೆ ಮರಳಿದ. ಆದರೆ ದುರ್ಗದ ಅಭಿಮಾನ ಭಂಗವಾಗಿತ್ತು. ಈ ನೋವು ದಿನೇದಿನೇ ಪ್ರಬಲವಾಗಿ, ಪ್ರತೀಕಾರಕ್ಕೆ ಸನ್ನಾಹ ನಡೆಯಿತು. ದುರ್ಗದಲ್ಲಿ ಹಾವನೂರು, ಗುಡೇಕೋಟೆ, ಅನಂತಪುರ, ಜರಿಮಲೆ, ತರೀಕೆರೆ ಪಾಳಯಗಾರರನ್ನು ಕೂಡಿಕೊಂಡ ಭರಮಣ್ಣನಾಯಕನು ತನ್ನ ಸೇನೆ, ದಳವಾಯಿಗಳೊಡನೆ ಸರ್ವಸನ್ನದ್ಧನಾಗಿ ಕ್ರಿ. ಶ. ೧೬೯೧ರಲ್ಲಿ ಅಣಜಿಗೆ ನಡೆದ. ಈ ಬಾರಿಯ ಯುದ್ಧದಲ್ಲಿ ಶತ್ರುಗಳಿಗೆ ಸೋಲಾಯಿತು. ತಾವು ಹಿಡಿದ ಕೋಟೆಯನ್ನು ಬಿಟ್ಟು ಕೈವಶವಾಗಿದ್ದ ಅಂದಣ, ಬಿರುದು ವಗೈರೆಗಳನ್ನು ಮರಳಿ ಕೊಟ್ಟು ತಮ್ಮ ರಾಜ್ಯಕ್ಕೆ ಮರಳಿದರು.

ದುರ್ಗದ ಒಳಹೊರಗು ಅರ್ಥವಾಗುತ್ತಿದ್ದಂತೆ ಭರಮಣ್ಣನಾಯಕ ತನ್ನ ರಾಜ್ಯದ ಗಡಿಠಾಣ್ಯಗಳ, ಬುರುಜು ಬತೇರಿಗಳ ದುರಸ್ತಿಗೆ ಕೈಯಿಕ್ಕಿದನು. ಅದರಲ್ಲೂ ದೂರದ ಸ್ಥಳವಾದ ಅಣಜಿ (ಹಾಲೂರು) ಕೋಟೆಯನ್ನು ಬಿಚ್ಚಿ ಕಟ್ಟುವ ಕೆಲಸ ಆರಂಭವಾಯಿತು. ಈ ಸುದ್ದಿ ತಿಳಿದ ಹರಪನಹಳ್ಳಿಯವರು ಕ್ರಿ. ಶ. ೧೬೯೨ರಲ್ಲಿ ಮತ್ತೆ ಅಣಜಿಗೆ ಬಂದು ಕೋಟೆಯ ಕೆಲಸಕ್ಕೆ ಅಟಕಾವು ಮಾಡಿದರು. ತಮ್ಮ ಸೀಮೆಯಾಗಿದ್ದ ಅಣಜಿಯನ್ನು ಆಕ್ರಮಿಸಿ ಮತ್ತೆ ಸೋತು ರಾಜಿಯಾಗಿ ಹೋಗಿದ್ದ ಹರಪನಹಳ್ಳಿಯವರು ಆ ಯುದ್ಧದ ಗಾಯ ಮಾಯುವ ಮೊದಲೇ ಕೂಚುನಗಾರಿಯನ್ನು ಬಾರಿಸುತ್ತಿದ್ದಾರೆ! ಇದುವರೆಗೂ ದುರ್ಗಕ್ಕೆ ನೂತನ ದೊರೆ ಬಂದ ಕೂಡಲೇ ನಿಶ್ಚಿತವಾಗಿ ಲಗ್ಗೆ ಹಾಕುತ್ತಿದ್ದರು, ಇದೀಗ ನೂತನ ಕ್ರಮವನ್ನು ಕೈಗೊಂಡಿದ್ದಾರೆಂದು ದುರ್ಗದವರು ಕೆಂಡಮಂಡಲವಾದರು.

ಕ್ರಿಸ್ತಶಕ ೧೬೭೭ರಲ್ಲಿ ದುರ್ಗದ ನಾಯಕನಾಗಿದ್ದ ಚಿಕ್ಕಣ್ಣನಾಯಕನ ಕಾಲದಲ್ಲಿ ಪ್ರಾರಂಭವಾದ ಅಣಜಿಯ ಯುದ್ಧ ಮುಂದೆ ಕ್ರಿ. ಶ. ೧೬೯೨ರ ತನಕ ಆಗಾಗ ನಡೆಯುತ್ತಲೇ ಹೋಗುತ್ತದೆ. ಇದಕ್ಕೆ ಕಾರಣ ಅಣಜಿಯ ಬಗೆಗಿನ ಕಟ್ಟಾಸೆಯೇನೂ ಅಲ್ಲ, ದುರ್ಗದವರ ಮೇಲಿನ ಆಜನ್ಮ ದ್ವೇಷ. ದುರ್ಗದವರು ಸೇನೆಯ ಕಟ್ಟೆಚ್ಚರದಲ್ಲಿ ಕೋಟೆ ಕಟ್ಟುತ್ತಿದ್ದರೆ, ಊರಹೊರಗೆ ಹರಪನಹಳ್ಳಿಯವರು ಕತ್ತಿಹಿಡಿದು ಕೇಕೆ ಹೊಡೆಯುತ್ತಾರೆ. ಇದಕ್ಕೆ ಆಯುಧಗಳಿಂದಲೇ ದುರ್ಗದವರು ಉತ್ತರಿಸಿದರು. ನಿತ್ಯ ಕಾದಾಟ, ಕಡಿದು ಕೊಚ್ಚುವುದು ದುರ್ಗದ ದಂಡಿನ ಕೆಲಸವಾಯಿತು. ದಿನವೂ ಹರಪನಹಳ್ಳಿಯ ಸೇನೆಯ ನೆತ್ತರು ನೀರಿನಂತೆ ಹರಿದು ಮಡುಗಟ್ಟುತ್ತಿತ್ತು ! ದುರ್ಗದವರು ಆ ನೆತ್ತರ ಕೆಸರನ್ನು ತಂದು ಅಣಜಿ (ಹಾಲೂರು) ಕೋಟೆಕಟ್ಟಡ ಕಲ್ಲುಗಳ ಸಂದಿಗೆ ಸುರಿದರಂತೆ ! ಅದೇ ಮಣ್ಣನ್ನೇ ಕೋಟೆಯ ಗೋಡೆಗೆ ನೊರೆದರಂತೆ ! ಹೀಗಾಗಿ ಶತ್ರುರಕ್ತವನ್ನು ಕುಡಿದೇ ಆ ಕೋಟೆ ಪ್ರಾಯಕ್ಕೆ ಬಂದಿತು !

ಯುದ್ಧ, ತನ್ಮೂಲಕ ಸಾವು ನೋವು ಆ ಕಾಲದಲ್ಲಿ ಅಪರೂಪದ ಸಂಗತಿಗಳೇನಲ್ಲ. ಆದರೆ ಯಾರೂ ಮೂಗು ಮುರಿಯುವ, ಬೆಚ್ಚುವ ಇಂತಹ ಭೀಬತ್ಸ ಕಾರ್ಯಕ್ಕೆ ದುರ್ಗದ ಅರಸರು ಹಾಗೂ ಅವರ ದಂಡು ಕೈಯಿಟ್ಟಿದಕ್ಕೆ ಕಾರಣ ಮಾತ್ರ ನಿಚ್ಚಳವಾಗಿದೆ. ಸಾಲು ಯುದ್ಧಗಳಿಂದ ಬೇಸತ್ತು ಇದೇ ಕಡೇಯುದ್ಧವಾಗಿಬಿಡಬೇಕೆಂದು ಛಲ ತೊಟ್ಟು ನಿಂತವರು ಈ ಕೃತ್ಯಗೈದುದರಲ್ಲಿ ಆಶ್ಚರ್ಯವೇನಿಲ್ಲ. ಕೇವಲ ಅಣಜಿ ಕೈವಶವಾಗುವುದು, ಕೋಟೆ ಕಟ್ಟುವುದಷ್ಟೇ ಮುಖ್ಯವಾಗಿರಲಿಲ್ಲ – ಇನ್ನೆಂದೂ ಹರಪನಹಳ್ಳಿಯವರು ಇತ್ತ ಕಡೆ ತಲೆ ಹಾಕಬಾರದೆಂಬುದೇ ಈ ಅಮಾನುಷ ಕೃತ್ಯಕ್ಕೆ ನಿಮಿತ್ತವಾಯಿತು.

ಮತ್ತೆ ಕ್ರಿ. ಶ. ೧೭೭೯ರಲ್ಲಿ ಇದೇ ಭರಮಣ್ಣನಾಯಕ ತಮ್ಮ ಆಜನ್ಮಶತ್ರುಗಳಾದ ಹರಪನಹಳ್ಳಿಯವರನ್ನು ಹಣಿಯಲೆಂದು ಅವರ ದೇವಸ್ಥಾನದಲ್ಲಿ ಮೇಳ ಕಟ್ಟಿಸಿ ಕೊಂಡು ಕುಳಿತಿದ್ದನಂತೆ! ಅನಂತರ ಧರ್ಮಕಹಳೆ ಹಿಡಿಸಿ ಚಿತ್ರದುರ್ಗಕ್ಕೆ ಮರಳಿದನು.

೨. ಆನವಟ್ಟಿಯ ರಕ್ತಾಭಿಷೇಕ : ಚಿತ್ರಕಲ್ಲು ದುರ್ಗದ ಕೊನೆಯ ಅರಸ ರಾಜಾ ಮದಕರಿನಾಯಕ ಕೊಟ್ಟ ಭಾಷೆಗೆ ತಪ್ಪುವರ ಗಂಡ, ಚಂದ್ರಗಾವಿ ಛಲದಂಕ, ಭಾರೀ ನಿಗಳಾಂಕನೆಂದು ಬಿರುದಾಂತವನು. ಅವನ ಬಿರುದುಗಳ ಪಟ್ಟಿಯಲ್ಲಿ 'ಹಗಲು ಕಗ್ಗೊಲೆ ಮಾನ್ಯ' ಎಂಬುದೂ ಒಂದು! ಇವನ ಧೈರ್ಯ, ಸಾಹಸಗಳೆಲ್ಲಾ ಚಿತ್ರಕಲ್ಲುಸೀಮೆಗೆ ಸಂಬಂಧಿಸಿದ ಐತಿಹಾಸಿಕ ದಾಖಲೆ ಗಳಲ್ಲಿ ನಿಬಿಡವಾಗಿ ಕಾಣಬರುತ್ತವೆ.

ಅಗಾಧವಾದ ಸೇನಾಶಕ್ತಿಯ ಪೇಷ್ವೆಗಳೊಂದು ಕಡೆ ; ಮತ್ತೊಂದು ಕಡೆ ಮಹತ್ವಾಕಾಂಕ್ಷಿಯಾದ ಸಾಹಸಿ ಹೈದರಾಲಿಖಾನ್. ಇವರಿಬ್ಬರೂ ಮದಕರಿಯ ಸ್ನೇಹ, ಸಹಾಯ, ಸಹಕಾರ ಬಯಸುವವರೇ. ಹಲಕೆಲವು ಕೋಟೆ-ಕೊತ್ತಳುಗಳನ್ನು ಹಿಡಿಯುವಲ್ಲಿ, ಆ ಪಾಳಯ ಗಾರರನ್ನು ಪಡಾವು ಮಾಡುವಲ್ಲಿ ಈ ನಾಯಕ ಹೈದರ ನಿಗೆ ಆಯುಧವಾಗಿ ದುಡಿದವನು. ಇಬ್ಬರೂ ಮಹತ್ವಾ ಕಾಂಕ್ಷಿಗಳೇ ಆಗಿದ್ದುದರಿಂದ, ಬೇರೆ ಬೇರೆ ಕಾರಣಗಳೂ ಸೇರಿ ಮದಕರಿಯು ನವಾಬನನ್ನು ಕೈಬಿಟ್ಟ. ಅಷ್ಟೇ ಅಲ್ಲ, ಮುಂದೆ ಇಬ್ಬರೂ ಪರಮ ವೈರಿಗಳೇ ಆಗಿಬಿಟ್ಟರು. ಈ ಸಮಯಕ್ಕೆ ಪೇಷ್ವೆ ಮಾಧವರಾಯ ತನ್ನ ಮೂರು ಲಕ್ಷ ಫೌಜಿನೊಡನೆ ಕರ್ನಾಟಕಕ್ಕೆ ಬಂದು ಹೈದರನ ಸೀಮೆಗಳನ್ನು ಆಕ್ರಮಿಸುತ್ತಾನೆ. ದುರ್ಗದ ಮದಕರಿ ನಾಯಕನ ಸಹಾಯದಿಂದ ನವಾಬನ ಸಾಮಂತಗಿರಿದುರ್ಗ, ಹುತ್ರಿದುರ್ಗ, ನುಗ್ಗೆಹಳ್ಳಿ, ಹಾಗಲ್ವಾಡಿ, ಬಾಣಾವರ ಗಳು ಪೇಷ್ವೆಗಳ ಅಂಕೆಗೆ ಬಂದವು.

ಮದಕರಿನಾಯಕನ ನೆರವಿನಿಂದ ಸಾಲು ಯುದ್ಧ ಗಳಲ್ಲಿ ಗೆಲುವನ್ನೇ ಪಡೆದ ಪೇಷ್ವೆಗೆ ಅತ್ಯಾನಂದವಾಗಿರಲು ಸಾಕು; ಇದು ತನ್ನ ಗೆಳೆಯನ ಬಗ್ಗೆ ಅಭಿಮಾನ ಮೂಡಿ ಸಿತು. ಕೆಲದಿನಗಳಲ್ಲೇ ಈ ಸಹಾಯ, ತನ್ಮೂಲಕ ಪ್ರಾಪ್ತವಾದ ಜಯಗಳ ಉಲ್ಲೇಖದೊಡನೆ ಪೇಷ್ವೆಯಿಂದ ದುರ್ಗದ ದೊರೆಗೆ ರಾಜಕಾರಣದ ಓಲೆಯೊಂದು ಬಂದಿತು. ಅದರ ಒಟ್ಟು ಸಾರಾಂಶವೆಂದರೆ, 'ಇದೀಗ ಹೈದರನ ಸೀಮೆಯಾದ ಆನವಟ್ಟಿಯನ್ನು ತೆಗೆದು ಕೊಳ್ಳಲು ಹೊರಟಿದ್ದೇವೆ, ಹಿಂದಿನಂತೆ ಈಗಲೂ ನಮ್ಮೊಡನೆ ಸಹಕರಿಸಿ ಜಯ ತಂದು ಕೊಡಿ'– ಎಂದು. ಒಂದಾದ ಮೇಲೊಂದರಂತೆ ನಿರಂತರವಾಗಿ ಗೆಲವು ಕಂಡಿದ್ದ ನಾಯಕನಿಗೆ, ಅವನ ದಂಡಿಗೆ ಲಡಾಯಿಯೆಂದರೆ ಇನ್ನಿಲ್ಲದ ಉತ್ಸಾಹ; ಅದರಲ್ಲೂ ಶ್ರೀರಂಗಪಟ್ಟಣದವರ ಮೇಲೆಂದರೆ ಕೇಳಬೇಕೆ! ದುರ್ಗದ ದಂಡು ಆನವಟ್ಟಿಗೆ ದೌಡಾಯಿಸಿತು. ಘೋರ ಕಾಳಗ ಕೈಗಟ್ಟಿ ಮಾನವ ರಕ್ತ ನೀರಿನಂತೆ ಹರಿದು ಕೊನೆಗೂ ಮದಕರಿಯ ಸಮರ್ಥ ನಾಯಕತ್ವದ ಫಲವಾಗಿ ಪೇಷ್ವೆಗಳಿಗೆ ಜಯ ಲಭಿಸಿತು.

ರಣೋನ್ಮಾದದಿಂದ ಮದಕರಿಯು ತಮ್ಮವರು ಕಡಿದು ಕೊಚ್ಚಿದ್ದ ಶತ್ರುಗಳ ತಲೆಗಳಿಂದಲೇ ಒಂದು ವೀರಾಸನ ವನ್ನು (ಜಗಲಿ) ಕಟ್ಟಿಸಿದ. ಪೇಷ್ವೆಗಳಿಗೆ, 'ನೀವಿಂದು ವೀರಾಸನದ ಮೇಲೆ ಆಸೀನರಾಗಬೇಕು, ಶತ್ರು ರಕ್ತ ದಿಂದಲೇ ನಿಮಗೆ ಅಭಿಷೇಕ ಮಾಡುತ್ತೇವೆ'– ಎಂದ. ನೂರಾರು ಯುದ್ಧಗಳ ಸಾವು ನೋವು, ನೆತ್ತರು ಮಾಂಸ ಗಳನ್ನು ಕಂಡಿದ್ದ ಪೇಷ್ವೆಗಳಿಗೆ ಇದನ್ನು ಕೇಳಿ, ತಲೆ ಬುರುಡೆಗಳ ಪೀಠವನ್ನು ಕಂಡು ಮನಸ್ಸು ಹೇಸಿತು. ಕೊನೆಗೆ ಉಪಾಯಾಂತರದಿಂದ, 'ನಾವು ಬ್ರಾಹ್ಮಣರು, ಇದೆಲ್ಲ ನಮಗಲ್ಲ; ನೀವಾದರೋ ಕ್ಷತ್ರಿಯರು, ನೀವೇ ಇದನ್ನು ಮಾಡಿಸಿಕೊಳ್ಳಿ'ರೆಂದು ಹೇಳಿ ಜಾರಿಕೊಳ್ಳಬೇಕಾ ಯಿತು. ಮದಕರಿನಾಯಕ ಆ ವೀರಾಸನದ ಮೇಲೆ ಕುಳಿತು ಕುಂಭಗಳಲ್ಲಿ ಶತ್ರುರಕ್ತವನ್ನು ತುಂಬಿಸಿ ಅಭಿಷೇಕ ಮಾಡಿಸಿಕೊಂಡ!

ಕೇವಲ ತಾನೊಬ್ಬ ಇಂತಹ ಅಮಾನುಷವನ್ನು ಮಾಡಿ ದರೆ ಸಾಕೇನು? ತನ್ನ ದಂಡಿನವರಿಗೂ ಅಪ್ಪಣೆ ಮಾಡಿದ: 'ಇಂದು ನೀವೆಲ್ಲಾ ಶತ್ರು ತಲೆ ಬುರುಡೆಗಳನ್ನು ಒಲೆ ಗುಂಡಾಗಿ ಮಾಡಿಕೊಂಡು ಅದರ ಮೇಲೆ ಪಾತ್ರೆಗಳ

ನ್ನಿಟ್ಟು ಇಷ್ಟವಾದ ಮೃಗ ಪಕ್ಷಿಗಳ ಮಾಂಸವನ್ನು ಬೇಯಿಸಿ ತಿನ್ನಿ'ರೆಂದು ! ದೊರೆಯ ಅಪ್ಪಣೆಯನ್ನು ಶಿರಸಾವಹಿಸಿ ಪಾಲಿಸಿದರು ದಂಡಿನ ಜನ ! ದಾಖಲೆಗಳಲ್ಲಿ ಉಲ್ಲೇಖವಾಗಿರುವ ಈ ಪ್ರಸಂಗದ ಬಗ್ಗೆ ಆಲೋಚಿಸಿದಾಗ 'ಯುದ್ಧ ಮತ್ತು ಪ್ರೇಮ ಇವೆರಡರಲ್ಲಿ ಯಾವುದೂ ನಿಷಿದ್ಧವಲ್ಲ' ಎಂಬುದು ದೃಢವಾಗುತ್ತದೆ.*

---

* ಕೃತಜ್ಞತೆಗಳು : ಶ್ರೀಯುತರಾದ ಲಕ್ಷ್ಮಣ್ ತೆಲಗಾವಿ, ನಾ. ಪ್ರಭಾಕರ್ ಮತ್ತು ಲ. ನಾಗರಾಜ ಹೊಯ್ಸಳ ಅವರುಗಳಿಗೆ.